ಡಿ. ವಿ. ದೇವರಾಜ್*

# ರಾಜಕೀಯ ದೃಷ್ಟಿಕೋನದಲ್ಲಿ ಸೋಮನಾಥಪುರದ ದೇವಾಲಯ ಸಂಕೀರ್ಣ

ಕರ್ನಾಟಕದ ರಾಜಕೀಯ ಇತಿಹಾಸವನ್ನು ಅವ ಲೋಕಿಸಿದರೆ ಒಂದು ವಿಷಯ ಸ್ಪಷ್ಟವಾಗುತ್ತದೆ. ಅದೆಂದರೆ ನಮ್ಮ ನಾಡಿನ ರಾಜರು ತಮ್ಮೆಲ್ಲ ಕಾಲ, ಧನ, ಮತ್ತು ಶ್ರಮವನ್ನು ವ್ಯಯಮಾಡಿ, ಬಹು ಸುಂದರ ವಾದ ದೇವಾಲಯಗಳನ್ನು ನಿರ್ಮಿಸಿದ್ದು. ಈ ದೃಷ್ಟಿ ಯಿಂದ ಹೊಯ್ಸಳರ ಕಾಲ ಮುಖ್ಯವಾದದ್ದು. ಕರ್ನಾ ಟಕಕ್ಕೆ ರಾಮಾನುಜಾಚಾರ್ಯರ ಆಗಮನ ಮತ್ತು ವಿಷ್ಣುವರ್ಧನನ ಸಂಪರ್ಕದಿಂದ ಕರ್ನಾಟಕದ ದಕ್ಷಿಣ ಭಾಗದಲ್ಲಿ ಹೆಚ್ಚಾಗಿ ವಿಷ್ಣು ದೇವಾಲಯಗಳು ರಚಿತ ವಾದವು. ಈ ದಿಸೆಯಲ್ಲಿ 13ನೇ ಶತಮಾನದ ಉತ್ತ ರಾರ್ಧದಲ್ಲಿ ಮೂರನೇ ನರಸಿಂಹನ ಕಾಲದಲ್ಲಿ ಸೋಮ ನಾಥಪುರ ಅಗ್ರಹಾರ ಮತ್ತು ದೇವಾಲಯ ಸಂಕೀರ್ಣ ನಿರ್ಮಾಣಗೊಂಡಿತು. ನರಸಿಂಹನಿಗೆ ಭುಜಬಲದಂತಿದ್ದ ಆ ಕಾಲದ ಅತ್ಯಂತ ಪ್ರಮುಖ ವ್ಯಕ್ತಿಯಾಗಿದ್ದ ಸೋಮ ನಾಥ ದಂಡನಾಯಕನು ಈ ದೇವಾಲಯದ ರಚನೆಗೆ ಕಾರಣನಾದವನು.

ಕ್ರಿ.ಶ. ೧೨೬೮–೬೯ರಲ್ಲಿ ಈ ದೇವಾಲಯ ಸಂಕೀರ್ಣ ಕಾವೇರಿ ನದಿಯ ದಂಡೆಯ ಮೇಲೆ ಸೃಷ್ಟಿ ಗೊಂಡಿತು. ಈಗ ನಾವು ಪರಿಶೀಲಿಸಬೇಕಾದ ಅಂಶ ವೆಂದರೆ, ಈ ಸಂಕೀರ್ಣ ಮತ್ತು ಅಗ್ರಹಾರದ ನಿರ್ಮಾಣ ಅಂದಿನ ರಾಜಕೀಯ ವ್ಯವಸ್ಥೆಯ ಯಾವುದಾದರೂ ಅಂಶವನ್ನು ಸೂಚಿಸುತ್ತದೆಯೇ ಎಂಬುದು. ರಾಜ ಕೀಯಕ್ಕೂ ಮತ್ತು ದೇವಾಲಯಗಳ ನಿರ್ಮಾಣಕ್ಕೂ ಯಾವ ಸಂಬಂಧ ಎಂಬ ಪ್ರಶ್ನೆ ಮೂಡಬಹುದು. ರಾಜರು ದೇವಾಲಯಗಳನ್ನು ನಿರ್ಮಾಣ ಮಾಡುತ್ತಿ ದ್ದುದು ಭಕ್ತಿ ಪ್ರದರ್ಶನದ ಜೊತೆಗೆ ತಮ್ಮ ಧನಶಕ್ತಿ ಮತ್ತು ಪ್ರಭುತ್ವಶಕ್ತಿಗಳನ್ನು ಶಾಶ್ವತವಾಗಿ ಪ್ರದರ್ಶಿ ಸಲು ಒಂದು ಮಾಧ್ಯಮವಾಗಿತ್ತು. ಈ ದೃಷ್ಟಿಯಿಂದ ಸೋಮನಾಥಪುರ ದೇವಾಲಯ ಸಂಕೀರ್ಣವನ್ನು ಪರಿ ಶೀಲಿಸಬಹುದು.

ಈ ಸಂಕೀರ್ಣದಲ್ಲಿ ಸ್ಥೂಲವಾಗಿ ಎರಡು ವರ್ಗ ಗಳ ದೇವಾಲಯಗಳು ಕಾಣಬರುತ್ತವೆ. ಒಂದು ವಿಷ್ಣು ಮತ್ತು ಅವನ ಅವತಾರಗಳಿಗೆ ಸಂಬಂಧಿಸಿದ ದೇವಾಲಯಗಳು. ಅದರಲ್ಲಿ ಬಹಳ ಮುಖ್ಯವಾದುದ್ದು ಸೋಮನಾಥಪುರದ ಹೃದಯದಂತಿರುವ ಕೇಶವ ದೇವಾಲಯ. ಪಂಚಲಿಂಗದೇವಾಲಯ ಶಿವನಿಗೆ ಸಂಬಂಧಿಸಿದ ಎರಡನೇ ವರ್ಗದ ದೇವಾಲಯ. ಈ ಎರಡೂ ಸಂಕೀರ್ಣಗಳನ್ನು ಕಟ್ಟಿಸಿದವನು ಪ್ರಖ್ಯಾತ ನಾಗಿದ್ದ ಸೋಮನಾಥ ದಂಡನಾಯಕ. ಈ ದೇವಾ ಲಯದ ಸಮಸ್ತ ಆಡಳಿತ ಮತ್ತು ಕೈಂಕರ್ಯಗಳಿಗೆ ಮತ್ತು ಊಳಿಗದವರ ಸಂಬಳಕ್ಕೆ ವ್ಯವಸ್ಥೆ ಮಾಡಿದವನು ಮೂರನೇ ನರಸಿಂಹ. ನರಸಿಂಹ ಶ್ರೀವೈಷ್ಣವ ; ಸೋಮ ನಾಥ ದಂಡನಾಯಕ ಶೈವ. ಈ ಸಂಕೀರ್ಣದಲ್ಲಿ ವೈಭವ, ಮತ್ತು ಆಡಂಬರಾಲಂಕಾರಗಳಿಂದ ಎದ್ದು ಕಾಣುವ ದೇವಾಲಯ ಕೇಶವ ದೇವಾಲಯ. ಸರಳ ವಾಗಿ ನಿರ್ಮಿತವಾಗಿರುವುದು ಪಂಚಲಿಂಗ. ಇಲ್ಲಿಯ

* ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ. ಮೈಸೂರು.

ವಸತಿ ನೆಲೆಗೆ ಹೆಸರು ಕೊಟ್ಟಿರುವುದು ಸೋಮನಾಥನ ಹೆಸರು. ಇದು ದಂಡನಾಯಕನ ಹೆಸರಲ್ಲ. ಇತಿಹಾಸ ಕಾರರಾದ ಎಂ. ಎಚ್. ಕೃಷ್ಣ ಮೊದಲಾದವರು ಸೋಮನಾಥ ದಂಡನಾಯಕನ ಹೆಸರನ್ನೆ ಅಲ್ಲಿನ ದೇವಾಲಯ ಸಂಕೀರ್ಣವನ್ನೊಳಗೊಂಡ ವಸತಿ ಪ್ರದೇಶಕ್ಕೆ ಕೊಟ್ಟನೆಂದು ಊಹಿಸಿದ್ದಾರೆ. ಆದರೆ, ಈ ಅಭಿಪ್ರಾಯ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ, ಅಂದಿನ ಊಳಿಗಮಾನ್ಯ ರೀತಿಯ ರಾಜಕೀಯ ವ್ಯವಸ್ಥೆಯಲ್ಲಿ ಅಧಿರಾಜನ ಹೆಸರನ್ನು ಬಿಟ್ಟು, ತನ್ನ ಹೆಸರನ್ನೇ ಕೊಡುವುದು ಅಂದಿನ ದೃಷ್ಟಿಯಲ್ಲಿ ವಿರೋಧಾಭಾಸವಾಗಿ ತೋರುತ್ತದೆ. ಹಾಗಿದ್ದಲ್ಲಿ, ಸೋಮನಾಥಪುರ ಎಂಬ ಹೆಸರಿಗೆ ಆಧಾರವಾದದ್ದು ಯಾವುದು ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಉತ್ತರ ಸುಲಭ. ಇದರ ಮೂಲ ಶಿವನ ಪ್ರಖ್ಯಾತ ರೂಪವಾದ ಸೋಮನಾಥ ಎಂಬುದು ಸ್ಪಷ್ಟ. ಗುಜರಾತಿನ ಸೌರಾಷ್ಟ್ರದ ಸೋಮನಾಥ ಅಂದಿನ ಭಾರತೀಯ ಜನಮನದಲ್ಲಿ ಭಕ್ತಿಯನ್ನು ಹುಟ್ಟಿಸುವ ಖ್ಯಾತ ದೈವವಾಗಿತ್ತು. ಆ ದೇವಾಲಯವನ್ನು ಮಹಮ್ಮದ್ ಘಜನಿ ನಾಶಮಾಡಿದ ನೆನಪು ಇನ್ನೂ ಹಚ್ಚಹಸುರಾಗಿತ್ತು. ಕನ್ನಡದಲ್ಲಿ ಈ ವೇಳೆಗೆ ರಾಘವಾಂಕನ **ಸೋಮನಾಥ ಚರಿತೆ** ಕರ್ನಾಟಕದಲ್ಲಿ ಪ್ರಚಾರಕ್ಕೆ ಬಂದಿದ್ದಿತು. ಈ ಕಾವ್ಯದ ನಾಯಕನಾದ ಆದಯ್ಯ, ಸೌರಾಷ್ಟ್ರದಲ್ಲಿ ನೆಲೆಸಿದ್ದ ಸೋಮನಾಥನನ್ನು ಕರ್ನಾಟಕಕ್ಕೆ ಕರೆದುಕೊಂಡು ಬಂದು ಪ್ರತಿಷ್ಠಾಪಿಸಿರುವುದು ಅರ್ಥಪೂರ್ಣವಾದದ್ದು. ಮೂರನೇ ನರಸಿಂಹನ ದಂಡನಾಯಕ ಸೋಮನಾಥನ ವಂಶದ ಪೂರ್ವಜರು ಶಾಸನಗಳಲ್ಲಿ ದಾಖಲಾಗಿರುವಂತೆ ಚಾಲುಕ್ಯ ವಂಶಕ್ಕೆ ಸೇವೆ ಸಲ್ಲಿಸಿದವರಾಗಿದ್ದರು. ಸೋಮನಾಥ ಸಂಪ್ರದಾಯ ದಕ್ಷಿಣ ಕರ್ನಾಟಕಕ್ಕೂ ಹಬ್ಬಿತು. ಒಂದು ಮುಖ್ಯವಾದ ಸಂಗತಿಯೆಂದರೆ, ಈ ಸಂಕೀರ್ಣದಲ್ಲಿರುವ ಪಂಚಲಿಂಗಗಳ ಪೈಕಿ, ಸೋಮನಾಥಲಿಂಗವೂ ಒಂದು. ಇದರಿಂದ ಸೋಮನಾಥ ಎಂಬ ಹೆಸರು ಬಂದಿತು ; ದಂಡನಾಯಕನಿಂದಲ್ಲ. ಏಕೆಂದರೆ, ಮೂರನೇ ನರಸಿಂಹನ ಹೆಸರನ್ನು ಬಿಟ್ಟು ಸೋಮನಾಥ ದಂಡನಾಯಕನ ಹೆಸರನ್ನು ನೀಡುವುದು ಅಂದು ಸಮಂಜಸದಾಗಿರಲಿಲ್ಲ.

ಸೋಮನಾಥಪುರದಲ್ಲಿ, ಸುಂದರವೂ, ಬೃಹತ್ ಮತ್ತು ಮಹತ್ ಎರಡರಲ್ಲೂ ಪ್ರಖ್ಯಾತವಾಗಿರುವುದು ಕೇಶವ ದೇವಾಲಯ. ಆದರೆ ಅದಕ್ಕೆ ಕೇಶವಪುರ ಎಂಬ ಹೆಸರನ್ನು ಏಕೆ ನೀಡಿಲಿಲ್ಲ ? ಇದಕ್ಕೆ ಕಾರಣ ಪ್ರಾಯಶಃ ದೇವಾಲಯ ಸಂಕೀರ್ಣವನ್ನು ನಿರ್ಮಾಣ ಮಾಡಿದವನ ಅದಿದೈವದ ಹೆಸರನ್ನು ನೀಡಬೇಕಾದದ್ದು ಸಹಜವಾಗಿತ್ತು. ಶೈವ ಪಂಥಕ್ಕೆ ಸೇರಿದ ಸೋಮನಾಥ ಕಟ್ಟಿಸಿದ್ದು ಸುಂದರವಾದ ವಿಷ್ಣು ಪಂಥದ ದೇವಾಲಯ. ತನ್ನ ಪ್ರಭುವಿನ ಗೌರವ ಮತ್ತು ಮನ್ನಣೆಯನ್ನು ಹಾಗೂ ಆತನ ಧಾರ್ಮಿಕ ಸಹಿಷ್ಣುತೆಯನ್ನು ಪ್ರದರ್ಶಿಸುವುದು ಸೋಮನಾಥನ ಉದ್ದೇಶವಾಗಿತ್ತು. ಅಂದು ಪ್ರಧಾನ ಅಧಿಕಾರಿಗಳು ರಾಜನ ಮನಸ್ಸನ್ನು ಒಲಿಸಲು ಇಂತಹ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಈ ದೃಷ್ಟಿಯಿಂದ ಸೋಮನಾಥಪುರ ದೇವಾಲಯ ಸಂಕೀರ್ಣವನ್ನು ಮತ್ತು ಸ್ಥಳಕ್ಕೆ ಬಂದ ಹೆಸರನ್ನು ಅರ್ಥೈಸುವುದು ಹೆಚ್ಚು ಸಮಂಜಸವಾಗಿ ತೋರುತ್ತದೆ. ಶೈವರೂ ಮತ್ತು ವೈಷ್ಣವರೂ ಭಾತೃತ್ವ ಭಾವನೆಯಿಂದ ಬದುಕುತ್ತಿದ್ದ ಚಿತ್ರ, ಶಾಸನಗಳಿಂದ ಸ್ಪಷ್ಟವಾಗುತ್ತದೆ. ಎರಡೂ ವರ್ಗದ ದೇವಾಲಯಗಳಿಗೂ ಒಂದೇ ಮೊತ್ತದ ದತ್ತಿಯನ್ನು ಮೂರನೇ ನರಸಿಂಹ ಬಿಟ್ಟಿರುವುದು ಇದನ್ನು ಮತ್ತಷ್ಟು ಪುಷ್ಟೀಕರೀಸುತ್ತದೆ. ಒಟ್ಟಿನಲ್ಲಿ ಪ್ರಜಾವರ್ಗದಲ್ಲಿದ್ದ ವೈವಿಧ್ಯತೆಯನ್ನು ಗೌರವಿಸಿ, ಆಡಳಿತಕ್ಕೆ ಸುಭದ್ರತೆಯನ್ನು ಮತ್ತು ನಿಷ್ಠೆಯನ್ನು ಸಂಪಾದಿಸುವುದು, ಧರ್ಮ ಮತ್ತು ದೈವಭಕ್ತಿಗಳ ಪ್ರದರ್ಶನ ದಷ್ಟೇ ಪ್ರಮುಖವಾಗಿದ್ದವೆಂದು ಹೇಳಬಹುದು.